# 12

# ಜೀವದ ಮೌಲ್ಯ

ಮತ್ತು

# ಇತರ ಕಥೆಗಳು

ಸಂಗ್ರಾಹಕರು ಮತ್ತು ಅನುವಾದಕರು:

**ಶ್ರೀ। ಎಲ್. ಎಸ್. ನಾಯ್ಕ.**

೧. ಜೀವದ ಮೌಲ್ಯ. ೨. ಪತಂಗ ಮತ್ತು ಬಾಲಕ. ೩. ಕರುಣೆಯ ಮೌಲ್ಯ. ೪. ವಧುಪರೀಕ್ಷೆ ೫. ಕೆಂಪು ಹೂದಾನಿ ೬. ನೀನು ಹಿಂದೆಗೆದುಕೊಳ್ಳಲಾರೆ. ೭. ಪ್ರತಿಧ್ವನಿಯ ನಿಯಮ. ೮. ನಾವು ನಾವೇ ಆಗಿರೋಣ.

**1954.**



ಒಂದಾಣೆ ಮಾಲೆ

# ಜೀವದ ಮೌಲ್ಯ ಮತ್ತು ಇತರ ಕಥೆಗಳು

..........

## ಜೀವದ ಮೌಲ್ಯ

"ಗುಣ ಹೊಂದುವ ಆಶೆ ಹಾಗೂ ಭರವಸೆಗಳಿಲ್ಲದ ಅಸ್ವಸ್ಥದವರಿಂದ, ಪರಿಹರಿಸಲಾಗದ ತೊಂದರೆಗಳಿಗೀಡಾದ ಜನರಿಂದ ಈ ಜಗತ್ತಿನ ಭಾರವನ್ನು ಹೆಚ್ಚಿಸುವುದು ಅವಿವೇಕ."—ಎಂಬುದಿದು, ವೈದ್ಯಕೀಯ ವಿದ್ಯಾರ್ಥಿಯಾಗಿದ್ದಾಗ ತರುಣ ಡಾಕ್ಟರ್ ತೇಡ್ಡಿಯಸ್ ಮಾರ್ಲಿನನ ನಿಶ್ಚಿತಾಭಿಪ್ರಾಯವಾಗಿದ್ದಿತು. "ವಾಸಿಯಾಗದ ಮತ್ತು ಅತಿಯಾದ ನೋವು—ನರಳುವಿಕೆಗಳನ್ನು ಕೊಡುವ ರೋಗಿಗಳಿಗೆ ಸುಖ ಮರಣವುಂಟಾಗುವಂತೆ ಮಾಡುವುದೇ ಲೇಸು"—ಎಂದು, ಅವನು ತನ್ನ ತರಗತಿಯ ಇತರ ವಿದ್ಯಾರ್ಥಿಗಳೊಡನೆ ವಾದಿಸುತ್ತಿದ್ದನು.

"ಆದರೆ, ನಾವು ಇಲ್ಲಿರುವುದು ಇದಕ್ಕಾಗಿಯೇ!—ಕುಂಟರ, ಅಂಗ ಊನವಿರುವವರ, ಕಣ್ಣು ಕಾಣದವರ ಆರೈಕೆಗಾಗಿಯೇ!"—ಎಂದು ಅವರು ಪ್ರತಿಭಟಿಸುತ್ತಿದ್ದರು.

"ಡಾಕ್ಟರರು ಇಲ್ಲಿರುವುದು ರೋಗಿಗಳನ್ನು ಆರೋಗ್ಯವಂತರನ್ನಾಗಿ ಮಾಡಲಿಕ್ಕೇ. ಆದರೆ, ಯಾವುದೂ ಅವರನ್ನು ಗುಣಪಡಿಸುವಂತಿಲ್ಲವಾದರೆ ಅವರು, ನರಳುವುದಕ್ಕಿಂತ ಸಾಯುವುದೇ ಲೇಸು!" ಎಂದು ಮಾರ್ಲಿನನು ಛಲದಿಂದ ನುಡಿಯುತ್ತಿದ್ದನು.

o o o o o o o

ಮಾರ್ಲಿನನ ವ್ಯಾಸಂಗದ ಕೊನೆಯ ವರ್ಷವಾಗಿತ್ತು. ಅದೊಂದು ರಾತ್ರಿ ಮಾರ್ಲಿನನು ಆಸ್ಪತ್ರೆಯ ಕೆಲಸದಲ್ಲಿದ್ದನು. ನಗರದ ಒಂದು ಕೊಳಕು ಭಾಗದಿಂದ ಒಂದು ಪ್ರಸವಕ್ಕಾಗಿ ಕರೆ ಬಂತು. ಮಾರ್ಲಿನನು ಕೂಡಲೇ ಹೋಗಿ, ಜರ್ಮನಿಯಿಂದ ವಲಸೆಬಂದ ಓರ್ವ ಹೆಂಗುಸಿನ ಪ್ರಸವದಲ್ಲಿ ನೆರವಾದನು. ಅದು ಅವಳ ಹತ್ತನೆಯ ಮಗುವಾಗಿತ್ತು; ಒಂದಕ್ಕಿಂತ ಇನ್ನೊಂದು ಕಾಲು ಗಿಡ್ಡವಾಗಿ ಆ ಮಗು ಹುಟ್ಟಿತ್ತು. ಡಾಕ್ಟರನ ಅಭ್ಯಾಸ

ದಂತೆ, ಅವನು ಆ ಮಗುವು ಸಿರಾಡುವಂತೆ ಅದರ ಬಾಯಿಯೊಳಗೆ ಊದಿದನು. ಆದರೆ, ಮರು ವೇ ಅವನಿಗನಿಸಿತು: "ಏನು ದುರಂತವೀ ಶಿಶು! ಅದು ಬೆಳೆದಾಗ ಜೀವನವಿಡೀ ಕುಂಟು ಕಾಲಿನಲ್ಲೇ ನಡೆಯಬೇಕು. ಇತರ ಮಕ್ಕಳು 'ಮೋಂಟ'ನೆಂದು ಗೇಲಿ ಮಾಡುವರು. ಈ ಮಗು ಜೀವಿಸುವಂತೆ ಮಾಡುವುದೇಕೆ? ಇದು ಸತ್ತರೆ, ಜಗತ್ತಿಗೆ ಈ ಒಂದು ಮಗುವಿನ ಅಭಾವವು ತಟ್ಟಲಾರದು."

ಆದರೆ, ಅವನ ಚಿಕಿತ್ಸಾಭಾವನೆಯು ಬಲವಾಗಿತ್ತು. ಆ ಪುಟ್ಟ ಶ್ವಾಸ ಕೋಶಗಳು ತಮ್ಮ ಕೆಲಸ ಮಾಡುವಂತೆ ಪ್ರಯತ್ನಿಸುವುದನ್ನು ಅವನು ತಡೆಯಲಾರದೆ, ಪುನಃ ಆ ಶಿಶುವಿನ ಶ್ವಾಸೋಚ್ಛ್ವಾಸ ಕ್ರಿಯೆಗೆ ಸಹಾಯಕನಾದನು. ಕೊನೆಗೆ ಅವನು ನಿರೀಕ್ಷಿಸುತ್ತಿದ್ದ ಉಸಿರೆಳೆಯು ಬಂತು. ಮಗುವಿನ ಮುಖವು ಕೆಂಪಗಾಯಿತು. ಆ ಮೇಲೆ ಒಂದು ಅಶಕ್ತತೆಯು, ಅಸಮ್ಮತಿಯ ಚೀರಾಟವೂ ಬಂತು.

ಡಾಕ್ಟರನು, ತನ್ನ ಉಪಕರಣಗಳನ್ನು ಚೀಲದೊಳಗೆ ತುಂಬಿ, ನಗರದ ಕಡೆಗೆ ಹೊರಟುಹೋದನು. ತಾನು ಮಾಡಿದ ಕೆಲಸಕ್ಕಾಗಿ ಅವನು ಬಹಳ ಅಸಮಾಧಾನ ಪಟ್ಟಿದ್ದನು. "ನಾನೇಕೆ ಹಾಗೆ ಮಾಡಿದೆನೆಂದು ನನಗೇ ತಿಳಿಯದು. ದಾರಿದ್ರ್ಯ ತುಂಬಿದ ಆ ಮನೆಯಲ್ಲಿ, ಈ ಮೊದಲೇ, ಬೇಕಾದುದಕ್ಕಿಂತ ಹೆಚ್ಚು ಮಕ್ಕಳಿರುವರು. ನ್ಯೂನತೆಯುಳ್ಳ ಇದನ್ನು ನಾನೇಕೆ ಬದುಕಿಸಿದೆ? ಇಂಥ ಕುಂಟರಿಲ್ಲದಿದ್ದರೆ ಜಗತ್ತು ಉತ್ತಮವಾಗದೇ?"—ಎಂದು ಅವನು ತನ್ನೊಳಗೇ ಗೊಣಗುತ್ತಿದ್ದನು.

೦ ೦ ೦ ೦ ೦ ೦ ೦

ವರುಷಗಳು ಉರುಳಿದುವು. ಡಾಕ್ಟರ್ ಮಾರ್ಲಿನನು, ಒಂದು ಕೈಗಾರಿಕಾ ನಗರಕ್ಕೆ ಹೋಗಿ ತನ್ನ ವೃತ್ತಿ ಸ್ಥಾಪಿಸಿದ್ದನು. ಚೆನ್ನಾಗಿ ಸಂಪಾದನೆಯಾಗುತ್ತಿತ್ತು. ತಾರುಣ್ಯದಲ್ಲಿದ್ದ ಆ ಸುಧಾರಣಾಭಾವವು ಅವನನ್ನು ಬಿಟ್ಟುಹೋಗಿತ್ತು. ಜನರು ಮರಣ ಹೊಂದುವುದು ಎಷ್ಟೋ ಉತ್ತಮವಿದ್ದರೂ, ಅವರನ್ನು ಜೀವಂತರನ್ನಾಗಿ ಉಳಿಸಲು ಹಠಹಿಡಿದು ಶ್ರಮಿಸುವ, ವಿರಾಮವಿಲ್ಲದೆ ದುಡಿವ ಡಾಕ್ಟರರಲ್ಲಿ ಅವನೂ ಒಬ್ಬನಾಗಿದ್ದನು.

ಡಾಕ್ಟರ ಮಾರ್ಲಿನನೀಗ ತಕ್ಕಷ್ಟು ವೃದ್ಧನಾಗಿದ್ದನು. ಅವನಿಗೂ ಅವನ ಪಾಲಿನ ಕಷ್ಟಗಳಿದ್ದುವು. ಅವನ ಒಬ್ಬನೇ ಮಗ ಮತ್ತು ಆ ಮಗನ

ಹೆಂಡತಿ, ಒಂದು ಮೋಟಾರು ಅವಘಡದಲ್ಲಿ ಸತ್ತಿದ್ದರು. ಅವರ ಚಿಕ್ಕ ಮಗಳ ಆರೈಕೆಯನ್ನು ಅವನೇ ನೋಡಿಕೊಂಡಿದ್ದನು. ಮಾರ್ಲಿನನು ತನ್ನ ಮೊಮ್ಮಗಳನ್ನು ಬಹಳವಾಗಿ ಪ್ರೀತಿಸುತ್ತಿದ್ದನು.

ಒಂದು ದಿನ, ಅವಳ ('ಬಾರ್ಬರಾ' ಎಂದಾಕೆಯ ಹೆಸರು) ಹತ್ತನೆಯ ವರ್ಷದ ಬೇಸಗೆಯ ದಿನ, ಅವಳು ಏಳುವಾಗಲೇ ಕುತ್ತಿಗೆಯ ಸೆಳೆತ ಮತ್ತು ಕೈಕಾಲುಗಳ ನೋವಿನಿಂದ ನರಳುತಿದ್ದಳು.

ಮೊದಲು ಅದು 'ಪೋಲಿಯೋ' ಎಂದು ಪರಿಗಣಿಸಲ್ಪಟ್ಟಿತು. ಆದರೆ, ಕ್ರಮೇಣ ಅದು ಅಪರೂಪವಾಗಿ ಉಂಟಾಗುವ—ವೈದ್ಯಕೀಯ ಗ್ರಂಥಗಳಲ್ಲಿ ಅದರ ಉಲ್ಲೇಖವು ಬಹು ಸಂಕ್ಷೇಪವಾಗಿರುವಂಥ-ಅಸಾಧಾರಣವಾದ ವಿಷವು ಅಂಟು ರೋಗವೆಂದು ತಿಳಿದು ಬಂತು. ಡಾಕ್ಟರ್ ಮಾರ್ಲಿನನು, ತನ್ನ ದೀರ್ಘಕಾಲದ ವೃತ್ತಿಯಲ್ಲಿ ಇಂತಹ ರೋಗಸ್ಥಿತಿಯನ್ನು ಒಮ್ಮೆಯಾದರೂ ಕಂಡಿರಲಿಲ್ಲ. ಅವನು ನರಸಂಬಂಧವಾದ ರೋಗಚಿಕಿತ್ಸಕರನ್ನು ಕರೆಸಿದನು. ಅವರು, ನಿರಾಶೆಯಾಗುವಂತೆ ತಲೆಯಲ್ಲಾಡಿಸಿದರು. ಆರೋಗ್ಯಕ್ಕೆ, ತಿಳಿದಿರುವ ಮದ್ದು ಯಾವುದೂ ಇಲ್ಲವೆಂದೂ ಅದು ನಿಧಾನವಾಗಿ ಹೆಚ್ಚುತ್ತ ಸಣ್ಣ ಯಾ ದೊಡ್ಡ ಪ್ರಮಾಣದ ಪಾರ್ಶ್ವವಾಯುವಾಗಿ ಪರಿಣಮಿಸುವುದೆಂದೂ ತಿಳಿಸಿದರು.

ಬಂದ ಪ್ರವೀಣರಲ್ಲಿ ಒಬ್ಬನು ಹೇಳಿದನು: "ಹೇಗಿದ್ದರೂ ಒಬ್ಬ ತರುಣ ಡಾಕ್ಟರನಿದ್ದಾನೆ. ಅವನು ನಿರ್ವಹಿಸಿದ ಇಂತಹ ರೋಗಸ್ಥಿತಿಗಳಲ್ಲಿ ತಾನು ಪಡೆದ ಸಾಫಲ್ಯದ ಕುರಿತು ಇತ್ತೀಚೆಗೆ ಒಂದು ಲೇಖನವನ್ನು ಬರೆದಿರುವನು. ಅವನ ಹೆಸರು ಟಿ. ಜೆ. ಮಿಲ್ಲರ್. ನಾನು ನಿನ್ನ ಸ್ಥಾನದಲ್ಲಿದ್ದರೆ ಅವನ ಸಹಾಯ ಪಡೆಯುವೆ."

ವಿವಿಧ ತರದ ಕುಂಟುತನದ ವ್ಯಾಧಿಗಳಿಗೆ ತುತ್ತಾದವರಿಗೆ ತನ್ನ ಹೊಸ ಹಾಗೂ ಕ್ರಾಂತಿಕಾರಕ ಚಿಕಿತ್ಸಾವಿಧಾನಗಳನ್ನು ಏರ್ಪಡಿಸಿದ್ದ ಡಾಕ್ಟರ್ ಮಿಲ್ಲರನ ಚಿಕ್ಕ ಖಾಸಗಿ ಆಸ್ಪತ್ರೆಗೆ ಡಾಕ್ಟರ್ ಮಾರ್ಲಿನನು ತನ್ನ ಮೊಮ್ಮಗಳು ಬಾರ್ಬರಾಳನ್ನು ಕರಕೊಂಡು ಹೋದನು. ಡಾಕ್ಟರ್ ಮಿಲ್ಲರನು ಕುಂಟುತ್ತ ನಡೆಯುತ್ತಿದ್ದುದನ್ನು ಕಂಡನು.

ಡಾಕ್ಟರ್ ಮಾರ್ಲಿನನಿಗೆ ಡಾ| ಮಿಲ್ಲರನು ಹೇಳಿದನು: "ನನ್ನ ಕುಂಟು ಕಾಲು ನನಗೆ, ನಾನೂ ಅವರಲ್ಲೊಬ್ಬನೆಂಬ ಭಾವನೆ ಕೊಡುತ್ತಿದೆ. ನನ್ನನ್ನು

'ಕುಂಟಣ್ಣ'ನೆಂದು ಸಂಬೋಧಿಸಲು ಮಕ್ಕಳಿಗೆ ಆಸ್ಪದ ಕೊಡುತ್ತೇನೆ. ಅವರೂ ಹಾಗೆ ಕರೆಯಲು ಸಂತೋಷಪಡುತ್ತಾರೆ. ಅದನ್ನು 'ತೇಡ್ಡಿಯಸ್' ಎಂಬ ನನ್ನ ಹೆಸರಿಗಿಂತಲೂ ಹೆಚ್ಚಾಗಿ ಮೆಚ್ಚುತ್ತೇನೆ."

"ತೇಡ್ಡಿಯಸ್?"—ಡಾಕ್ಟರ್ ತೇಡ್ಡಿಯಸ್ ಮಾರ್ಲಿನನು ಕುತೂಹಲಪಟ್ಟು ಡಾಕ್ಟರ್ ಮಿಲ್ಲರನನ್ನು ಪ್ರಶ್ನಿಸಿದನು: "ನಿನ್ನ ಹೆಸರಲ್ಲೂ ತೇಡ್ಡಿಯಸ್ ಎಂದಿದೆಯೇ?"

"ಅಹುದು,"— ಡಾ| ಮಿಲ್ಲರನೆಂದನು. ಬಹುತೇಕ ಮಕ್ಕಳಂತೆ ನನ್ನನ್ನೂ ಭೂಮಿಗಿಳಿಸಿದ ಒಬ್ಬ ತರುಣ ವೈದ್ಯಕೀಯ ವಿದ್ಯಾರ್ಥಿಯ ಹೆಸರನ್ನೇ ನನಗೆ ಇಡಲಾಯಿತು."

ಡಾಕ್ಟರ್ ತೇಡ್ಡಿಯಸ್ ಮಾರ್ಲಿನನ ಕಂಠವು ಬಿಗಿದು ಬಂತು. ತಾನು ತರುಣ ವಿದ್ಯಾರ್ಥಿಯಾಗಿದ್ದಾಗ, "ಈ ಒಂದು ಮಗುವಿನ ಅಭಾವವು ಜಗತ್ತಿಗೆ ತಟ್ಟಲಾರದು" ಎಂದು ತನ್ನೊಳಗೆ ಅಂದುಕೊಂಡದ್ದನ್ನು ಜ್ಞಾಪಿಸಿಕೊಂಡನು. ಆ ದಿನಗಳಲ್ಲಿ ಅವನು ಎಷ್ಟೊಂದು ಕುರುಡನಾಗಿದ್ದನು!

ಬಾರ್ಬರಳನ್ನು ಪುನಃ ನಡೆಯುವಂತೆ ಮಾಡಲು ಹೊರಟ ಡಾಕ್ಟರನಿಗೆ, ಮಾರ್ಲಿನನು ತನ್ನ ಕೈಯ್ಯನ್ನು ನೀಡಿ ಹೇಳಿದನು: "ಕುರುಡನಾಗಿರುವುದಕ್ಕಿಂತ ಕುಂಟನಾಗಿರುವುದೆಷ್ಟೋ ಉತ್ತಮ!"

[ಸಾರಾಂಶ: ಜಗತ್ತಿನಲ್ಲಿ 'ನಿಷ್ಪ್ರಯೋಜಕ' ಎಂಬ ವಸ್ತುವೇ ಇಲ್ಲ. ಹಾಗೆಯೇ 'ನಿಷ್ಪ್ರಯೋಜಕ ಜೀವಿ'ಯೂ ಇಲ್ಲ. 'ಕರುಣೆಯ' ಹೆಸರಲ್ಲಾದರೂ ಕೊಲ್ಲಬಾರದು, ಪ್ರತಿಯೊಬ್ಬನಿಗೂ ಜೀವಿಸುವ ಹಕ್ಕು ಇದೆ.]

(ಕೊನ್‌ಸ್ಟೆನ್ಸ್ ಜೆ. ಫೊಸ್ಟರ್ ಅವರ ಕಥೆಯ ಭಾಷಾಂತರ.)

---

## ಪತಂಗ ಮತ್ತು ಬಾಲಕ

ತುಂಟ ಹುಡುಗರಲ್ಲಿ ಹಲವರ ಹಾಗೆ ನಾನು ಅನೇಕ ಸಲ ಪೇಚಾಟಗಳಲ್ಲಿ ಬೀಳುತ್ತಿದ್ದೆ. ಅವುಗಳಿಂದ ಬಿಡಿಸಿಕೊಳ್ಳಲು, ಸಹಾಯಕ್ಕಾಗಿ ನನ್ನ ತಾಯಿಯ ಬಳಿಗೆ ಓಡುತ್ತಿದ್ದೆ.

ಆದರೆ, ನನ್ನ ತಾಯಿಯು, ನನ್ನ ಕಷ್ಟಗಳನ್ನು ನಾನೊಬ್ಬನೇ ಪರಿಹರಿಸಿಕೊಳ್ಳಬೇಕೆಂದು ಇಚ್ಛಿಸುತಿದ್ದಳು.

ನನಗೆ ಸಹಾಯ ಮಾಡಲು ಅವಳು ಏತಕ್ಕಾಗಿ ನಿರಾಕರಿಸುತ್ತಿರುವಳು ಎಂಬುದು ನನಗರಿಯದು. ನಾನು ಆಶ್ಚರ್ಯಪಡುತಿದ್ದೆ.

ಒಂದು ದಿನ ಒಂದು ಪತಂಗದ ಗೂಡು ಡವಡವನೆ ಬಡೆಯುತ್ತ ಕಷ್ಟಪಟ್ಟು ಹೊರಸೂಸುವುದನ್ನು ನೋಡಿದೆ. ನನಗೇಕೋ ಕರುಣೆ ತೋರಿತು. ಪತಂಗವು ಗೂಡಿನಿಂದ ಹೊರಬರಲು ಪೇಚಾಡುತ್ತಿತ್ತು. ಅದಕ್ಕೆ ಹೊರಬರಲು ಅವಕಾಶ ಕೊಡುವುದಕ್ಕಾಗಿ ಅವಸರದಿಂದ ಮುಂದರಿದು ನನ್ನ ಚೂರಿಯಿಂದ ಗೂಡನ್ನು ಕಡಿದು, ತೆರೆಯಲಿಕ್ಕೆ ಪ್ರಾರಂಭಿಸಿದೆ. ಈ ಶಸ್ತ್ರಕ್ರಿಯೆಯನ್ನು ನೋಡುವ ಸಲುವಾಗಿ ನನ್ನ ತಾಯಿಯು ನನ್ನ ಕಡೆಗೆ ತಿರುಗಿದಳು.

ಗೂಡನ್ನು ನಾನೇ ತೆರೆದೆ. ಆದರೆ, ಪತಂಗವು ಹಾರಲಾರದೆ ಉಳಿದುಕೊಂಡಿತು!

ನನಗೆ ಆಶಾಭಂಗವಾಯಿತು. ತಾಯಿ ನನ್ನನ್ನೇ ದಿಟ್ಟಿಸುತ್ತ ಹೇಳಿದಳು:

"ಮಗೂ, ಆ ಪತಂಗದ ಒದ್ದಾಟಗಳು, ಅದು ಹರಿದಾಡುತ್ತಿದ್ದ ಭೂಮಿಯಿಂದ ಮೇಲಕ್ಕೆ, ಲೋಕದ ಉನ್ನತಿಗೆ, ಏರಲು ಬಲವನ್ನು ಸಂಪಾದಿಸುವ ಸಲುವಾಗಿ ಇದ್ದುವು. ಅದು ಬಲ ಕೂಡಿಸಿಕೊಳ್ಳಲು ನೀನು ಅವಕಾಶ ಕೊಡಲಿಲ್ಲ. ಇನ್ನು ಆ ಪತಂಗವು ನಡೆಯಲಾರದು, ಹಾರಲಾರದು.

"ಮಗೂ! ಮಕ್ಕಳ ವಿಷಯವೂ ಆ ಪತಂಗದಂತೇ ಇದೆ. ನಿನ್ನ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ನಿನಗೆ ಸಹಾಯಕರಾಗಿ ಮತ್ತಾರಾದರೂ ಇದ್ದರೆ, ಮತ್ತೆ ನಿನಗೆ ವೃದ್ಧಿ ಹೊಂದಲು ಅವಕಾಶವಿಲ್ಲ. ಜೀವನದ ಹೋರಾಟಗಳಲ್ಲಿ ನಾವು ನಮ್ಮಷ್ಟಕ್ಕೆ ಅನುಭವಿಸುವ ಒದ್ದಾಟವು, ಇನ್ನು ಬರಲಿರುವ ಅಥವಾ ಬರಬಹುದಾದ ಒದ್ದಾಟವನ್ನು ಎದುರಿಸಿ ನಿಂತು ಹೋರಾಡಲು ನಮ್ಮ ಶಕ್ತಿಯನ್ನು ಹೆಚ್ಚಿಸುತ್ತದೆ"

(ಎ. ಜೆ. ಪೋಸ್ಟ್—ಅವರ ಒಂದು ಲೇಖನದಿಂದ ಆಯ್ದುದು.)

---

## ಕರುಣೆಯ ಮೌಲ್ಯ

ದುರ್ಬಲ, ಮುಪ್ಪಿನ ಮಹಿಳೆಯು, ಮಳೆಗೆ ನೆನೆದಿದ್ದಳು. ಬಳಲಿಯೂ ಇದ್ದಳು. ನ್ಯೂಯೋರ್ಕಿನ ಒಂದು ಚಲನಚ್ಚಿತ್ರ ಮಂದಿರದ

ಹೊರಗೆ ಟಿಕೇಟು ಪಡಕೊಳ್ಳಲು ಸಾಲುಗಟ್ಟಿದ ಜನರಲ್ಲಿ ಪ್ರಥಮದವಳಾಗಿದ್ದಳು. ಟಿಕೇಟ್ ಕೊಠಡಿಯ ಬಾಗಿಲು ತೆರೆಯಲು ಇನ್ನೂ ಸಮಯವಿತ್ತು.

ಅವಳು ಒಂದು ಕೈಯಲ್ಲಿ, 'ಸೆಂಡ್ವಿಚ್' (ರೊಟ್ಟಿಯ ಎರಡು ತೆಳು ಹೋಳುಗಳ ನಡುವೆ ರುಚಿಕರವಾದ ಪದಾರ್ಥವಾವುದಾದರೊಂದನ್ನೂ ಇಟ್ಟು ಜೋಡಿಸಿದ ತಿಂಡಿ) ಚೀಲವಿತ್ತು. ಇನ್ನೊಂದರಲ್ಲಿ ಕೊಡೆಯಿತ್ತು.

ಬಹು ಹೊತ್ತು ಅಲ್ಲಿ ಕಾಯುತ್ತ, ಆಕೆ ಅನಿರೀಕ್ಷಿತವಾಗಿ ಧೊಪ್ಪನೆ ಬಿದ್ದು ಮೂರ್ಛೆಹೋದಳು.

ನೀಲ ಮತ್ತು ಸ್ವರ್ಣವರ್ಣದ ಉಡುಪಿನಲ್ಲಿದ್ದ ದ್ವಾರಪಾಲಕನು ಬಂದು, ಅವಳನ್ನೆತ್ತಿ, ಬರಿದಾದ ಚಲಚ್ಚಿತ್ರ ಪ್ರದರ್ಶನಮಂದಿರದೊಳಗೊಯ್ದನು. ಅಲ್ಲಿ ಓರ್ವ ವೈದ್ಯನು ಅವಳನ್ನು ಪ್ರಜ್ಞೆಗೆ ತಂದನು. ಕೆಲ ಕ್ಷಣಗಳಲ್ಲೇ ಅವಳು ಹೊಂಬಣ್ಣದ ಮಖಮಲ್ ಆಚ್ಛಾದಿತ ಆಸನದ ಮೇಲೆ ಕುಳಿತು ಚಿತ್ರಮಂದಿರದ ಸಹಾಯಕ ವ್ಯವಸ್ಥಾಪಕನ ನಲ್ಮೆಯ ನೀಲನಯನಗಳನ್ನು ನೋಡುತ್ತಿದ್ದಳು.

ಅವನು ಕೇಳಿದನು: "ನಿನ್ನನ್ನು ಒಂದು ಬಂಡಿಯಲ್ಲಿ ನಿನ್ನ ಮನೆಗೆ ಕರೆದೊಯ್ಯುವಷ್ಟು ನೀನು ಶಕ್ತಳಾಗಿದ್ದೀಯೇ?"

ಮಸುಕಾದ ಹಸರು ಗರಿಗಳ ಅಸಂಬದ್ಧವಾದ ಟೋಪಿಯನ್ನು ಸರಿಹೊಂದಿಸುತ್ತ, ಗತಕಾಲದ ಬೆಡಗಿನ ಪೋಷಾಕುಗಳನ್ನು ಧರಿಸಿದ್ದಾ ವಯೋವೃದ್ಧೆಯು, ಹಲ್ಲು ಕಿರಿದು, "ನಾನು ಅಷ್ಟು ಅಶಕ್ತಳೆಂದು ನಿನ್ನ ಭಾವನೆಯೇ? ಚಿತ್ರವನ್ನು ನೋಡುವ ಸಲುವಾಗಿ ನಾನಿಲ್ಲಿಗೆ ಬಂದೆ. ದಯಮಾಡಿ ಹೇಳು, ಟಿಕೇಟು ಪಡಕೊಳ್ಳುವವರ ಸಾಲಿನಲ್ಲಿ ನಾನು ನನ್ನ ಸ್ಥಳ ಕಳಕೊಂಡೆನೇ?" —ಎಂದು ಆತುರದಿಂದ ಕೇಳಿದಳು.

ವ್ಯವಸ್ಥಾಪಕನು ಹೇಳಿದನು: "ನನಗೆ ನಿನ್ನ ವಿಷಯ ತುಸು ವಿವರಿಸು. ನಿನ್ನ ಪತಿಯು ಜೀವಂತನಾಗಿರುವನೇ?"

"ಇಲ್ಲ, ಗತನಾಗಿರುವನು. ನನ್ನ ಮಗನು ಕೂಡ ಸತ್ತಿರುವನು. ಅದಕ್ಕಾಗಿಯೇ ಗೇರಿ ಕೂಪರನ ಈ ಚಿತ್ರವನ್ನು ನಾನು ನೋಡಲು ಬಂದಿದ್ದೇನೆ. ಗೇರಿಯು ನನ್ನ ಮಗನಂತೇ ಕಾಣುತ್ತಿದ್ದಾನೆ. ಸಾಲಿನಲ್ಲಿಯ ನನ್ನ ಸ್ಥಾನಕ್ಕೆ ನೀನು ಹೋಗಲು ಅವಕಾಶ ಕೊಡುವಿಯಾದರೆ........"

"ನೀನು ನನ್ನೊಡನೆ ಬಾ. ಅಲ್ಲಿ, ಚಿತ್ರದ ಪೂರ್ವ ಪ್ರದರ್ಶನ ನಡೆಯುತ್ತಿದೆ. ಅಲ್ಲಿ ಕುಳಿತುಕೊಂಡು ನೀನದನ್ನು ನೋಡಬಹುದು. ನಾನು ನಿನಗೆ ಸ್ವಲ್ಪ ಬಿಸಿ ಕಾಫಿಯನ್ನೂ ಕಳಿಸುತ್ತೇನೆ. ದೇಖಾವೆ ಮುಗಿಯುವ ತನಕ ನೀನು ಅಲ್ಲಿಯೇ ಕುಳಿತುಕೊಳ್ಳಬಹುದು."

"ನಾನು ಒಂದು ಚಿತ್ರವನ್ನು ಯಾವಾಗಲೂ ಎರಡು ಬಾರಿ ನೋಡುತ್ತೇನೆ. ಎರಡು ದೇಖಾವೆಗಳ ವರೆಗೂ ನಾನು ಅಲ್ಲಿ ಕುಳಿತುಕೊಳ್ಳಬಹುದೇ?"

"ನೀನು ಇಷ್ಟಪಡುವಷ್ಟು."

—ಹೀಗೆ ಒಂದು ಗೆಳೆತನವು ಪ್ರಾರಂಭಿಸಿತು. ಹೊಸ ಚಿತ್ರ ಬಂದಾಗಲೆಲ್ಲ ಆ ಮುಪ್ಪಿನ ಮಹಿಳೆಯು, 'ಸೆಂಡ್ವಿಚ್' ಚೀಲ ಹಿಡಿದು ಕೊಂಡು ಬರುತ್ತಿದ್ದಳು. ವ್ಯವಸ್ಥಾಪಕನ ಕೋಣೆಯ ಬಾಗಿಲು ತಟ್ಟುತ್ತಿದ್ದಳು. ಅವನೊಡನೆ ಹರಟೆ ಹೊಡೆಯುತ್ತಿದ್ದಳು.

ಒಂದು ದಿನ ಅವಳು, ಅವನನ್ನು ತನ್ನ ಮನೆಗೆ ಚಹಾ ಕುಡಿಯಲು ಆಮಂತ್ರಿಸಿದಳು. ಅಷ್ಟು ಸಮಯದ ವರೆಗೆ ಮಂದಿರವನ್ನು ಬಿಟ್ಟಿರಲು ಅವನಿಗೆ ಅವಕಾಶವಿರಲಿಲ್ಲ. ರಸ್ತೆಯ ಮೂಲೆಯಲ್ಲಿನ ಉಪಾಹಾರ ಗೃಹದಲ್ಲಿ, ಅವರು ಜೊತೆಯಾಗಿ ಊಟ ಮಾಡಿದರು. ತಾವು ಒಬ್ಬರನ್ನೊಬ್ಬರು ಇನ್ನೆಂದೂ ಭೇಟಿಯಾಗಲಿಕ್ಕಿಲ್ಲವೆಂಬುದನ್ನು ಅವನಾಗಲೀ ಅವಳಾಗಲೀ ಅರಿತಿರಲಿಲ್ಲ. ಜಗತ್ತಿನಲ್ಲಿ, ಅಂದಿನ ದಿನಗಳಲ್ಲಿ ಮುಗ್ಗಟ್ಟು ಇತ್ತು. ಚಿತ್ರ ಮಂದಿರವು ಮುಚ್ಚಿಕೊಂಡಿತು. ಸಹಾಯಕ ವ್ಯವಸ್ಥಾಪಕನು ದುಡಿಮೆಗೆ ಬೇರೆ ಕಡೆಗೆಲ್ಲಿಯೋ ಹೊರಟು ಹೋದನು.

o o o o o o o

ನ್ಯೂಯೋರ್ಕ್ ನಗರದ ಎಂಭತ್ತೆಂಟನೇ ಪಶ್ಚಿಮದ 146ನೇ ನಂಬರಿನ ಮೂರಂತಸ್ತಿನ ಕಂದುಕಲ್ಲಿನ ಮನೆಯಲ್ಲಿ ಒಬ್ಬೊಂಟಿಗಳಾಗಿ ವಾಸಿಸುತ್ತಿದ್ದ ವೃದ್ಧ ಗೃಹಿಣಿಯು ಅನೇಕ ದಿನಗಳಿಂದ ಮನೆ ಹೊರಗೆ ಹೋಗುವುದನ್ನಾಗಲೀ ಒಳಗೆ ಬರುವುದನ್ನಾಗಲೀ ಯಾರೂ ನೋಡಲಿಲ್ಲವೆಂದು ಪೋಲಿಸರಿಗೆ ವರದಿಯಾಯಿತು. ನೋಡುವಾಗಲೇ ನಿರಾಶೆ ಹುಟ್ಟಿಸುವ ಆ ಮನೆಯ ಮುಂಬಾಗಿಲನ್ನು ಪೋಲಿಸ್ ಅಧಿಕಾರಿಗಳು ಬಲಪ್ರಯೋಗದಿಂದ ತೆರೆದರು. ಬರಿದಾದ, ಸದ್ದಿಲ್ಲದ, ತಗ್ಗಾದ ಮುಚ್ಚಿಗೆಯ ಕೋಣೆಗಳಿಂದ ಅವರು

ತವಕದಿಂದ ಮುಂದರಿದರು. ಬಳಿಕ, ಧೂಳು ತುಂಬಿದ ಸೋಪಾನ ಪಂಕ್ತಿಯನ್ನು ಹತ್ತಿ, ಮಲಗುವ ಕೋಣೆಯ ಬಾಗಿಲನ್ನು ಸೇರಿದರು. ಬಾಗಿಲು, ಒಳಗಿಂದ ಬೀಗ ಹಾಕಲ್ಪಟ್ಟು ಭದ್ರವಾಗಿತ್ತು.

ಅಲ್ಲಿ ಅವರಿಗೆ ಅಸ್ಪಷ್ಟ ನರಳುವಿಕೆ ಕೇಳಿಸಿತು. ಆದರೆ, ಬಾಗಿಲನ್ನು ಮುರಿಯಲು ಅವರು ಯತ್ನಿಸಿದಾಗ, ಅವರೆಲ್ಲರ ಬಲವೂ ಸಾಕಾಗಲಿಲ್ಲ. ಕಾಲ್ದಾರಿಯ ಕಡೆಯಿಂದ ಹೋಗಿ, ಕೋಣೆಯ ಮುಂಭಾಗದ ಕಿಟಕಿಗಳಿಗೆ ಏಣಿಯನ್ನಿಡಬೇಕಾಯಿತು. ಏಣಿಯನ್ನೇರಿ ಅವರು ಒಳಗೆ ಹೊಕ್ಕಿದಾಗ, —ಪಾರ್ಶ್ವವಾಯು ಮತ್ತು ಶ್ವಾಸಕೋಶದ ಜಟಿಲತೆಯಿಂದ ಉನ್ಮತ್ತಳಾಗಿ ಆ ವೃದ್ಧೆಯು ಬಿದ್ದುಕೊಂಡುದನ್ನು ಕಂಡರು. ಅವಳನ್ನು ಕೂಡಲೇ ಆಸ್ಪತ್ರೆಗೆ ಸಾಗಿಸಲಾಯಿತು. ಅಂದೇ ರಾತ್ರಿ ಅವಳು ಮರಣಪಟ್ಟಳು.

ಆ ದುರ್ಬಲ, ಮುಪ್ಪಿನ ಮಹಿಳೆಯು ಒಂದು ಉಯಿಲನ್ನು ಬರೆದಿಟ್ಟಿದ್ದಳು. ಫೇಸ್ ನೆಶನಲ್ ಬೇಂಕಿನಲ್ಲಿ ಆ ಉಯಿಲು ಸಿಕ್ಕಿತು. ಎಡ್ನಾ ಮೊರ್ಸ್ ಎಲ್ಲಿನ್ ಇಲ್ಲಿಯಟ್ ಎಂಬ ಅವಳ ಹೆಸರಿನ ಸಹಿಯಿತ್ತು. ಉದಾರ ಭಾವನೆಯಿಂದ ಅಂತಿಮ ಇಷ್ಟಪತ್ರದ ಮೂಲಕ ತನ್ನ ಚರ–ಸ್ಥಿರ ಸೊತ್ತುಗಳನ್ನು ಬಿಡುವಾಗ ಅವಳು, ಆ ಮಂದಿರದ ಸಹಾಯಕ ವ್ಯವಸ್ಥಾಪಕನನ್ನೂ ಜ್ಞಾಪಕದಲ್ಲಿಟ್ಟುಕೊಂಡಿದ್ದಳು.

ಅವಳು ಬರೆದಿದ್ದಳು: "ನಾನು ಅವನಿಗೆ ಈ ಬಹುಮಾನವನ್ನು ಕೊಡುತ್ತೇನೆ: ಏಕೆಂದರೆ, ನನ್ನ ಜೀವನದ ಇತ್ತೀಚೆಗಿನ ವರ್ಷಗಳು ಆಹ್ಲಾದಕರವಾಗುವಂತೆ ಮಾಡಲು ಸಹಾಯಕವಾದ ಹಲವು ಸುಯೋಗಗಳನ್ನು ನಾನು ಅವನಿಂದ ಪಡೆದಿರುತ್ತೇನೆ. ಅವನು ತನ್ನ ಸುಖಾವಹ ಮತ್ತು ವಿನೀತ ವರ್ತನೆಗಳಿಂದ ನನ್ನ ಸಂತುಷ್ಟತೆಗೆ ಯಥೇಚ್ಛವಾಗಿ ನೆರವಾಗಿದ್ದಾನೆ, ಮತ್ತು ಅವನು ನನ್ನಿಂದ ಎಂದೂ ಏನನ್ನೂ ಅಪೇಕ್ಷಿಸಲಿಲ್ಲ."

ಆ ವ್ಯವಸ್ಥಾಪಕನು ಎಲ್ಲಿದ್ದನು?

ತಿಂಗಳಿಗೆ 52 ಡೊಲರುಗಳ ವೇತನದಲ್ಲಿ ಒಂದು ಆಸ್ಪತ್ರೆಯಲ್ಲಿ ಸೇವಕನಾಗಿ ಕೆಲಸ ಮಾಡುತ್ತಿದ್ದ, ನೀಲನಯನಗಳ ಆ ಮನುಷ್ಯನನ್ನು ಅವರು ಕಂಡುಹಿಡಿದರು. ಆತನ ವಯೋವೃದ್ಧ ಗೆಳತಿಯು ಸುಮಾರು ಒಂದು ಮಿಲಿಯ ಡೊಲರುಗಳನ್ನು ಅವನಿಗೆ ಬಿಟ್ಟುಹೋಗಿದ್ದಳೆಂಬುದನ್ನು ಅವನಿಗೆ ತಿಳಿಸಿದರು.

ಅದು ಮೊದಲಿನ ಅಂದಾಜಾಗಿತ್ತು. ಆದರೆ, ತೆರಿಗೆ ಮತ್ತು ಇತರ ಕುಗ್ಗುವರಿಗಳಿಂದಾಗಿ ಅವನು ಕೊನೆಗೆ ಸಂಗ್ರಹಿಸಿದ ಮೊತ್ತವು ಒಂದೂವರೆ ಲಕ್ಷ ಡೋಲರುಗಳಷ್ಟಿತ್ತು.

o o o o o o o

ನನ್ನನ್ನು ತಪ್ಪಾಗಿ ಅರ್ಥ ಮಾಡಬೇಡಿರಿ. ಈ ಜಗತ್ತಿನಲ್ಲಿ ಇಂಥ ವಿಷಯಗಳು ಬಹಳ ಅಪರೂಪವಾಗಿ ಸಂಭವಿಸುತ್ತವೆ. ಆದರೆ, ನಿಮಗೆ ಇಷ್ಟನ್ನು ಹೇಳಬಲ್ಲೆ: ಈ ಜಗತ್ತಿನಲ್ಲಿ ನಾವು ಒಂದಿಷ್ಟು ಕರುಣೆಯನ್ನು ತೋರಿದರೆ, ಅದು ಅನೇಕ ವೇಳೆ ಅಂತಃಕರಣಕ್ಕೆ ತರುವ ಸಂತುಷ್ಟತೆಯು ಒಂದು ಮಿಲಿಯ ಡೊಲರುಗಳ ಮೌಲ್ಯದಷ್ಟಿದೆ.

(ಫುಲ್ಟನ್ ಔರ್ಸ್ಲರರ "ಎ ವಿಲ್ ಒಫ್ ಹರ್ ಓನ್" ಕಥೆಯ ಅನುವಾದ)

---

# ವಧು ಪರೀಕ್ಷೆ

ಒಮ್ಮೆ ಒಬ್ಬ ಪ್ರಖ್ಯಾತ ಅರಸನಿದ್ದನು. ಅವನು ಬಹುಕಾಲ ವಿವಾಹ ವಾಗಿರಲಿಲ್ಲ. ಯೋಗ್ಯ ಕನ್ಯೆಯನ್ನಾರಿಸಿಕೊಳ್ಳಬೇಕೆಂದು ಯೋಚಿಸಿದ್ದನು.

ಅವನಿಗಾಗಿ ಮೂವರು ಕನ್ಯೆಯರು ಗೊತ್ತುಮಾಡಲ್ಪಟ್ಟರು. ಅರಸನು ಅವರಲ್ಲಿ ಒಬ್ಬಳನ್ನು ಆರಿಸಿಕೊಳ್ಳಬೇಕಾಗಿತ್ತು. ತಾನು ಯಾರನ್ನು ಮದುವೆಯಾಗಬೇಕೆಂದು ತಿಳಿದುಕೊಳ್ಳುವ ಸಲುವಾಗಿ ಅವನು ಒಂದು ಪರೀಕ್ಷೆಯನ್ನು ಯೋಜಿಸಿದನು.

ಪ್ರತಿಯೊರ್ವ ಕನ್ಯೆಗೆ ಅವನು ಒಂದೊಂದು ಮುಷ್ಟಿ ನೀಲ ಮಣಿಗಳನ್ನು ಕೊಟ್ಟನು.

ಮೊದಲಿನವಳು ಹೇಳಿದಳು: "ನೀನು ಬಹಳ ದಯಾಪರನಾಗಿರುವಿ. ನಿನಗೆ ಅನೇಕ ಧನ್ಯವಾದಗಳು."

ಎರಡನೆಯವಳು ಹೇಳಿದಳು: "ನೀನು ಅತಿ ಮಧುರ ಹೃದಯದವನು ....ಆ ನೀಲ ಮಣಿಗಳೊಡನೆ ಕೆಲವು ವಜ್ರಗಳೂ ಇದ್ದರೆ ಅವುಗಳಿಂದ ಒಂದು ಮನೋಹರವಾದ ಕಂಠಹಾರವಾಗುವುದು."

ಮೂರನೆಯವಳು ಖಿನ್ನತೆಯಿಂದ, ಆದರೆ ಕೋಮಲತೆಯಿಂದ— ರತ್ನಗಳನ್ನು ತನ್ನಿಂದ ಸ್ವಲ್ಪ ದೂರ ಮಡಗಿದಳು. "ನನಗೆ ಅಂಥ ವಸ್ತು

ಗಳ ಅವಶ್ಯಕತೆಯಿಲ್ಲ"—ಅವಳು ಮಂಜುಳ ಹಾಗೂ ಭಾವೋದ್ರೇಕದ ಧ್ವನಿಯಲ್ಲಿ ಹೇಳಿದಳು—"ಜೀವನದಲ್ಲಿ ನಾನು ಕೇಳುತ್ತಿರುವುದು ಪ್ರೇಮ."

ಅರಸನು, ಆ ಮೂವರಲ್ಲಿ ಮೊದಲನೆಯವಳನ್ನು ಮದುವೆಯಾದನು.

**ನೀತಿ ಸೂತ್ರ:** ಜೀವನದ ಭಾಗಿಯಲ್ಲಿ, ಒಯ್ಯಾರವು, ತೃಪ್ತಿಯಾಗದ ಆಸೆಯಷ್ಟೆ ಅನಪೇಕ್ಷಣೀಯವಾಗಿದೆ.

(ಬೆಂ ಪೈನ್—ಅವರ ಇಂಗ್ಲಿಷಿನಿಂದ)

---

# ಕೆಂಪು ಹೂದಾನಿ

ಜೊನ್ ಮತ್ತು ಎಡ್ವರ್ಡ್,—ಇವರಿಬ್ಬರು ಸಹೋದರರು ಯಾವಾಗಲೂ ಪರಸ್ಪರ ವಾದದಲ್ಲಿ ತೊಡಗಿದಾಗಲೆಲ್ಲ, ಒಬ್ಬನು ಇನ್ನೊಬ್ಬನ ತಪ್ಪುಗಳನ್ನು ಸ್ಥಿರಪಡಿಸಲು ಯತ್ನಿಸಿ, ಇನ್ನೊಬ್ಬನೇ ಪೂರ್ಣವಾಗಿ ತಪ್ಪಿತಸ್ಥ ಎಂದು ಬಲಾತ್ಕಾರದ ತೀರ್ಪು ಕೊಡುತಿದ್ದರು. ಅಲ್ಲಿ, ಒಬ್ಬನು ಇನ್ನೊಬ್ಬನಿಂದ ತಿದ್ದಲ್ಪಡುವ ಅಥವಾ ಒಬ್ಬನ ವಾದವು ಸರಿಯಾಗಿದ್ದರೆ ಇನ್ನೊಬ್ಬನು ಒಪ್ಪುವ ಸಂಭವವೇ ಇರಲಿಲ್ಲ. ತರ್ಕ ಬಂದಾಗಲೆಲ್ಲ "ನೀನೇ ತಪ್ಪು" ಎಂದು ಸ್ಥಿರಪಡಿಸುವುದೇ ಇಬ್ಬರ ಛಲವಾಗಿತ್ತು.

ಉದ್ರೇಕದ ಅವರ ಅಂತಹ ಒಂದು ವಾದವನ್ನು ಒಂದು ದಿನ, ಅವರ ತಂದೆಯು, ಅವರ ಕಣ್ಣಿಗೆ ಬೀಳದಂತೆ ಮರೆಯಲ್ಲಿ ನಿಂತು ಕೇಳಿ, ಇಬ್ಬರನ್ನೂ ತನ್ನ ಕೊಠಡಿಗೆ ಕರೆದನು. ಆ ಮೇಲೆ ಇಬ್ಬರನ್ನೂ ಒಂದು ಮೇಜಿನ ಎರಡು ಬದಿಗಳಲ್ಲಿ ಎದುರುಬದುರಾಗಿ ಕುಳ್ಳಿರಿಸಿ, ಕೆಂಪು ಗಾಜಿನ ಒಂದು ಹೂದಾನಿಯನ್ನು ತೆಗೆದನು. ಆ ಹೂದಾನಿಯ ಒಂದು ಬದಿಯಲ್ಲಿ, ಬಿಳಿಯ ಒಂದು ಗುಲಾಬಿ ಹೂ ಚಿತ್ರಿಸಲ್ಪಟ್ಟಿತ್ತು. ಹೂದಾನಿಯನ್ನು ಮೇಜಿನ ಮಧ್ಯದಲ್ಲಿಟ್ಟು, ಜೊನನ ಕಡೆಗೆ ತಿರುಗಿ ಅವನು ಕೇಳಿದನು: "ನೀನು ಏನನ್ನು ನೋಡುತ್ತಿರುವೆ ಎಂದು ಹೇಳು!"

"ಒಂದು ಕೆಂಪು ಹೂದಾನಿಯನ್ನು ನೋಡುತಿದ್ದೇನೆ"—ಜೊನನು ಉತ್ತರವಿತ್ತನು.

ತಂದೆಯು, ಎಡ್ವರ್ಡನ ಕಡೆಗೆ ತಿರುಗಿ ಪ್ರಶ್ನಿಸಿದನು: "ನೀನೇನು ನೋಡುತ್ತಿರುವೆ?"

"ಒಂದು ಬಿಳಿ ಗುಲಾಬಿ ಹೂ ಇರುವ ಕೆಂಪು ಹೂದಾನಿಯನ್ನು ನೋಡುತಿದ್ದೇನೆ"—ಎಡ್ವರ್ಡನೆಂದನು.

ಆಗ ತಂದೆ ಹೇಳಿದನು: "ಮಕ್ಕಳೇ! ಎಲ್ಲವೂ ಅಷ್ಟೇ, ಹಾಗೇ!"

ಹುಡುಗರು ಅರಿತುಕೊಂಡರು. ಮತ್ತು ಈಗ ಇತರರೊಡನೆ ಅಭಿಪ್ರಾಯಭೇದಗಳು ನಿಷ್ಫಲವಾದಗಳಲ್ಲಿ ಕೆರಳುವಾಗಲೆಲ್ಲ ಆವರು ಆ ಕೆಂಪು ಗಾಜಿನ ಹೂದಾನಿಯನ್ನು ಜ್ಞಾಪಿಸಿಕೊಳ್ಳುವರು. ಮತ್ತು, "ಅದೆಲ್ಲವೂ ದೃಷ್ಟಿಕೋನದಲ್ಲಿದೆ, ನೋಟದ ನಿಟ್ಟನಲ್ಲಿದೆ" ಎಂದು ತಿರುಗಿ ಒಮ್ಮೆ ನಿಜ ರೂಪದಲ್ಲಿ ಗ್ರಹಿಸುತ್ತಾರೆ.

[ಶ್ರೀಮತಿ ಇ. ಜಿ. ಹೊರ್ನಂಗ್—ಅವರ ಲೇಖನದ ಅನುವಾದ.]

---

## "ನೀನು ಹಿಂದೆಗೆದುಕೊಳ್ಳಲಾರೆ!"

ನನ್ನ ತಂಗಿಯು, ತನ್ನ ಆಟದ ಗೆಳತಿಯರ ಕುರಿತು ಅಸತ್ಯ ಕಥನಗಳನ್ನು ಹರಡುವುದರಲ್ಲಿ ಅನುರಕ್ತಳಾಗಿದ್ದಳು. ಈ ಅಭ್ಯಾಸವು, ನಮ್ಮ ಮನೆಯವರ ಮತ್ತು ನಮ್ಮ ನೆರೆಹೊರೆಯವರೊಳಗೆ ಅನೇಕ ವಾಗ್ವಾದ—ಕಚ್ಚಾಟಗಳನ್ನು ಉಂಟು ಮಾಡುತಿತ್ತು. ವಾಸ್ತವವಾಗಿ, ಕೇಡು ಉಂಟು ಮಾಡುವ ಉದ್ದೇಶವು ಅವಳಿಗಿರಲಿಲ್ಲ. ಪ್ರತಿಯೊಂದು ಆಕ್ಷೇಪಣೆಯ, ದಂಡನೆಯ ನಂತರ ಅವಳು ವ್ಯಸನಪಟ್ಟು ಹೇಳುತಿದ್ದಳು: "ನಾನು ಆ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳುತ್ತೇನೆ."

ಸಾಮಾನ್ಯವಾದ ದಂಡನೆಯಿಂದ ಪ್ರಯೋಜನವಿರಲಿಲ್ಲ. ಆಗ, ನನ್ನ ತಾಯಿಯು ತನ್ನ ತಾಯಿಯಿಂದ ಕಲಿತ ಒಂದು ಪಾಠವನ್ನು ಜ್ಞಾಪಕ ಮಾಡಿಕೊಂಡಳು. ತುಪ್ಪಳು ತುಂಬಿದ ಒಂದು ದಿಂಬನ್ನು ತೆಗೆದುಕೊಂಡು ನನ್ನ ತಾಯಿಯು, "ಇದನ್ನು ಹೊರಗೆ ಒಯ್ದು ಕತ್ತರಿಸಿ ತೆರೆ" ಎಂದು ನನ್ನ ತಂಗಿಗೆ ಹೇಳಿದಳು. ನನ್ನ ತಂಗಿ ಹಾಗೇ ಮಾಡಿದಳು.

"ಈಗ,"—ನನ್ನ ತಾಯಿ ಹೇಳಿದಳು—"ಹೊರಗೆ ಬಿದ್ದ ಎಲ್ಲ ತುಪ್ಪಳುಗಳನ್ನು ನೀನು ಒಟ್ಟುಗೂಡಿಸು."

"ಆದರೆ, ಇದು ಅಸಾಧ್ಯ!"—ನನ್ನ ತಂಗಿ ದೃಢವಾಗಿ ಹೇಳಿದಳು—"ಅವುಗಳು ಎಲ್ಲ ಕಡೆಗಳಲ್ಲೂ ಹರಡಿಹೋಗಿವೆ!"

"ಸರಿಯೋ!"—ನನ್ನ ತಾಯಿ ಉತ್ತರವಿತ್ತಳು. "ಅವುಗಳು, ನೀನು ಹರಡುವ ಕತೆಗಳಂತೆಯೇ ಇವೆ. ಒಮ್ಮೆ ಅವುಗಳು ಚದರಿಸಲ್ಪಟ್ಟರೆ ಅವುಗಳನ್ನು ಹಿಂದೆಗೆದುಕೊಳ್ಳುವ ವಿಧಾನವಿಲ್ಲ."

ಈಗ, ಅಸ್ಪಷ್ಟ ವದಂತಿಗಳನ್ನು ಅಥವಾ ಬೀದಿ ಮಾತುಗಳನ್ನು ಮತ್ತೊಮ್ಮೆ ಹೇಳಬೇಕೆಂದು ತೋರಿದಾಗ, ನನ್ನ ತಂಗಿಗೆ ತಾಯಿ ಕಲಿಸಿದ ಪಾಠವನ್ನು ನಾನು ಜ್ಞಾಪಕಕ್ಕೆ ತಂದುಕೊಳ್ಳುತ್ತೇನೆ.

[ಪೀಟರ್ ಟಿ. ಮೊರೆಟ್ಟಿ ಅವರ ಲೇಖನದಿಂದ.]

# ಪ್ರತಿಧ್ವನಿಯ ನಿಯಮ

ನಾನು ಸಣ್ಣ ಹುಡುಗನಾಗಿದ್ದಾಗ ಒಂದು ದಿನ ಶಾಲೆಯಲ್ಲಿ ಒಂದು ಜಗಳದಲ್ಲಿ ಸಿಲುಕಿಕೊಂಡೆ. ನನ್ನ ದೇಹವೂ ಮನಸ್ಸೂ ಬೆಂದು ಕೊಂಡಿದ್ದುದು ಈಗಲೂ ಸ್ಪಷ್ಟವಾಗಿ ನೆನಪಿದೆ.

ನನ್ನ ಎದುರಾಳಿಯು ಮುಂದಿನ ಸಂದರ್ಭದಲ್ಲಿ ಭೇಟಿಯಾದಾಗ ನಾನು ಬಿಸುಡಲಿರುವ ಉರಿ ಮಾತುಗಳನ್ನೂ, ಬೆದರಿಕೆಗಳನ್ನೂ, ಮನೆ ಸೇರಿದ ಮೇಲೂ ಗುಣುಗುಟ್ಟುತ್ತಿದ್ದೆ. ಶಾಲೆಯ ಕೆಲವು ಹಿರಿಯ ಹುಡುಗರು, "ಅಗೌರವತೆಯು ಗಂಡು ಸತ್ತ್ವದ ಗುರುತು" ಎಂದು ಭಾವಿಸುತಿದ್ದರು. ಅಂಥವರಿಂದಲೇ ನನ್ನ ಶಬ್ದಸಂಪತ್ತಿಯನ್ನು, ಅಂಶ ಮಾತ್ರವಾದರೂ ನಾನು ಗಳಿಸಿದ್ದಿರಬೇಕು.

ನನ್ನ ತಾಯಿಯು, ನನ್ನ ಕಡೆಗೆ ವಿಶೇಷ ಗಮನವೇನನ್ನೂ ಕೊಡುವಂತೆ ತೋರಿಸಿಕೊಳ್ಳದೆ, ಅವಳ ಸ್ವಾಭಾವಿಕ ಪ್ರಶಾಂತ ರೀತಿಯಲ್ಲಿ ತನ್ನ ಕೆಲಸಗಳನ್ನು ಮಾಡುತ್ತಲೇ ಇದ್ದಳು.

ಮರುದಿನ, ಹಳ್ಳಿಗಾಡಿನಲ್ಲಿ ನಮ್ಮ ಮನೆಯವರ "ವನಭೋಜನ" (Picnic) ದ ಸಮಯ ಅವಳು ನನ್ನನ್ನು ಒತ್ತಟ್ಟಿಗೆ ಕರೆದು ಹೇಳಿದಳು: "ಲೂಯಿಸ್, ಅತ್ತ ಹೋಗೋಣ. ನಿನಗೆ ಏನೋ ಒಂದನ್ನು ತೋರಿಸಬೇಕೆಂದಿದ್ದೇನೆ."

ನನಗಾಶ್ಚರ್ಯವಾಯಿತು. ಏನಿರಬಹುದು?

ಕೆನಡದ ನ್ಯೂ ಬರ್ನ್ಸ್ವಿಕ್ ಬಳಿಯ ಆ ಗ್ರಾಮ್ಯ ಪ್ರದೇಶವು, ಸುತ್ತಲೂ ಒರಟೊರಟಾದ ಉನ್ನತ ಬೆಟ್ಟಗಳಿರುವ ಒಂದು ರಮಣೀಯ

ಕಣಿವೆಯುಲ್ಲಿದ್ದು, ಪ್ರತಿಧ್ವನಿ ಕೊಡುವಂತೆ ನೈಸರ್ಗಿಕ ರಚನೆಯುಳ್ಳದ್ದಾಗಿತ್ತು. ತಾಯಿ, ಆ "ಬೆಟ್ಟದ ಗೋಡೆಗೆ" ಎದುರಿರುವ ಒಂದು ಸ್ಥಳಕ್ಕೆ ನನ್ನನ್ನು ಕರೆದೊಯ್ದಳು.

"ಲೂವಿಸ್, ನಿನ್ನೆ ನೀನು ಹೇಳಿದುದನ್ನು, ನಾನು ಕೇಳಿದಂತೇ ಈಗ ಹೇಳು."

ನಾನು ಪೇಚಿನಲ್ಲಿ ಸಿಲುಕಿದೆ. "ನನಗೆ ನೆನಪಿಲ್ಲ ಮಮ್ಮಾ!" ಎಂದೆ.

ನನ್ನ ತಾಯಿಯು ವಿವಾದಾಂಶವನ್ನು ಹೊರಳಿಸಿ, ತೇಲಿಸಿ, ಯಾತಡವಮಾಡಿ ಮಾತಾಡುವವಳಲ್ಲ. ನೇರಾಗಿ ಹೇಳಿದಳು: "ನನಗೆ ನೆನಪಿದೆ. 'ಹಾಳಾಗಿ ಹೋಗು' ಎಂದು ನೀನು ಹೇಳಿದ್ದಿ."

ನಾನು ಒಪ್ಪಿಕೊಂಡೆ: "ಹೌದು, ಈಗ ನೆನಪಾಯಿತು."

ಅವಳು ಆಜ್ಞಾಪಿಸಿದಳು: "ಈಗ ಅದನ್ನು ಹೇಳು."

ನಾನು, ಸಾಧ್ಯವಿದ್ದಷ್ಟು ಸೌಮ್ಯತೆ ತಂದುಕೊಂಡು ಅದನ್ನು ಹೇಳಿದೆ.

ಆದರೆ, ಆ ಶಬ್ದಗಳು ಪ್ರತಿಧ್ವನಿಸಿ, ಬೆಚ್ಚು ಬೀಳಿಸುವ ನಾದದಿಂದ ತುಂಬಿ, ಮರಳಿ ಹೊಡೆದುವು.

"ಗಟ್ಟಿಯಾಗಿ ಮಗೂ, ಇನ್ನೂ ಗಟ್ಟಿಯಾಗಿ ಹೇಳು! ನಿನ್ನಿಂದ ಕೂಡಿದಷ್ಟು ಗಟ್ಟಿಯಾಗಿ ಹೇಳು! ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ ಕೂಗು!"

ಹಾಗೆ ಮಾಡುವುದು ನನಗೆ ಬೇಕಾಗಿರಲಿಲ್ಲ. ಆದರೆ, ನನ್ನ ತಾಯಿಗೆ ಅವಿಧೇಯನಾಗಲಾರೆನೆಂದೆನಿಸಿತು. ಆದುದರಿಂದ, ಆ ಬೆಟ್ಟಗಳನ್ನೆದುರಿಸಿ, ನನ್ನ ಶ್ವಾಸಕೋಶಗಳ ಬಲವನ್ನೆಲ್ಲ ಹಾಕಿ "ನೀನು ಹಾಳಾಗಿ ಹೋಗು" ಎಂದು ಕೂಗಿದೆ.

ಆ ಕೂಗು ಸಿಡಿಲಿನಂತೆ ಮರಳಿ ಬಂತು. ಒಂದು ಆಕಾಶವಾಣಿಯಂತೆ ಅದು ನನ್ನನ್ನು ದೂಷಿಸಿತು.

"ಈಗ ನೋಡು!"—ನನ್ನ ತಾಯಿ ಹೇಳಿದಳು—"ಜೀವನವು ಇದೇ ರೀತಿ ಇರುವುದು. ನಾವು ಅದಕ್ಕೆ ಹೇಳುವುದನ್ನೇ ಅದು ನಮಗೆ ಯಾವಾಗಲೂ ಹಿಂದಿರುಗಿಸುತ್ತದೆ. ಅದಕ್ಕೆ ಮತ್ತು ನಿನ್ನ ಸಹಚರ ಮನುಷ್ಯನಿಗೆ "ನೀನು ಹಾಳಾಗಿ ಹೋಗು" ಎಂದು ಶಪಿಸಿದರೆ, ಜೀವನ ಮತ್ತು ನಿನ್ನ ಸಹಚರ ಮನುಷ್ಯ ಅದನ್ನೇ ನಿನಗೆ ಮರಳಿ ಕೂಗುತ್ತಾರೆ. ನೀನು ಜೀವ

ನಕ್ಕೆ, ಮನುಷ್ಯ ಸ್ವಭಾವಕ್ಕೆ, "ನೀನು ಧನ್ಯನಾಗು" ಎಂದು ಹೇಳಿದರೆ, ಆಗ ನಿನ್ನ ಜೀವನವೂ ಅದೇ "ನೀನು ಧನ್ಯನಾಗು" ಎಂಬ ಶಬ್ದಗಳ ಪ್ರತಿಧ್ವನಿಯಾಗುವುದು........"

"ಲೂವಿಸ್! ನೀನು ಯಾರ ಸೇವೆ ಮಾಡಬೇಕೆಂದಿರುವೆಯೋ ಅವನನ್ನು ಆಯ್ದುಕೊಳ್ಳು, ನಿನಗೆ ಆರಿಸುವ ಅಧಿಕಾರವಿದೆ, ಶಕ್ತಿಯೂ ಇದೆ. ನೀನು ಜೀವಿಸಿರುವಷ್ಟು ಕಾಲ ನಿನಗೆ ಆ ಆಯ್ಕೆ ಇದೆ. ಪ್ರತಿ ದಿನದಲ್ಲಿ, ಬಹುತೇಕ ಪ್ರತಿ ಗಂಟೆಯಲ್ಲಿ ಯಾವುದಾದರೊಂದು ಆಯ್ಕೆಯು ನಿನಗೆ ಒಪ್ಪಿಸಲ್ಪಡುವುದು."

ವಿಸ್ಮಯಗೊಳಿಸುವ ಆ ದೃಷ್ಟಾಂತದಿಂದ ನನ್ನ ಮನಸ್ಸಿನ ಮೇಲೆ ಆ ಸಮಯದಲ್ಲಿ ನಿಸ್ಸಂದೇಹವಾಗಿ ಹೆಚ್ಚಿನ ಪರಿಣಾಮವುಂಟಾಗಿದ್ದರೂ ನನ್ನ ತಾಯಿಯು ನನಗೊಂದು ಬೆಳಕನ್ನು ತೋರಿಸಿಕೊಟ್ಟಿದ್ದಳು,—ದಿಟವಾದ ಸ್ಫೂರ್ತಿ ಕೊಡುವ ತತ್ತ್ವವನ್ನು ತೋರಿಸಿ ಕೊಟ್ಟಿದ್ದಳು—ಎಂದು ನಿಜರೂಪದಲ್ಲಿ ನಾನು ಗ್ರಹಿಸಿದ್ದೆನೆಂದು ಎಣಿಸುವುದಿಲ್ಲ. ಪ್ರತಿಯೊಂದು ಮಾನವ ಜೀವಿಯಂತೆ, ನಾನು ಕೆಲವೊಮ್ಮೆ ಜೀವನದಲ್ಲಿ ಮುಚ್ಚುಮರೆ ಮಾಡಿ ಆ ಪ್ರತಿಧ್ವನಿಯ ನಿಯಮವನ್ನು ಮುರಿದು ಹಾಕಲು ಪ್ರಯತ್ನಪಟ್ಟಿರುತ್ತೇನೆ. ಆದರೆ ನಾನು ಎಂದೂ, ಒಮ್ಮೆಯೂ ಜಯಶೀಲನಾಗಲಿಲ್ಲ.

[ಮೆಟ್ರೋ ಗೋಲ್ಡ್‌ವಿನ್ ಮೇಯರ್ಸ್ ಸಂಸ್ಥೆಯ ಲೂವಿಸ್ ಬಿ. ಮೇಯರ್ ಅವರ ಲೇಖನದ ಅನುವಾದ.]

---

# ನಾವು ನಾವೇ ಆಗಿರೋಣ

ಸುಶೀಲೆ ಮತ್ತು ನಾನು ಶಾಲೆಗೆ ಹೋಗುತಿದ್ದಾಗ, ನಾವು ಅನುಭವಿಸಿದ ಸಂತೋಷದ ದಿನಗಳು ಅನೇಕವಿದ್ದುವು. ಸಾಮಾನ್ಯ ಪಾಠಗಳ ಹೊರತು ನಾವು ಕಲಿತ ಅತಿ ಮುಖ್ಯವಾದ ವಿಷಯಗಳೂ ಹಲವಿದ್ದುವು. ಇವುಗಳಲ್ಲಿ ವಿಶಿಷ್ಟವಾದ ಒಂದು ಪಾಠವು ಈಗಲೂ ನಮ್ಮ ಜ್ಞಾಪಕದಲ್ಲಿ ಸ್ಥಿರವಾಗಿದೆ. ಯಾವಾಗಲಾದರೂ ನಮ್ಮ ಸಂಭಾಷಣೆಯಲ್ಲಿ ಈ ಪ್ರಸ್ತಾಪ ಬಂದಾಗ ನಾವು ಒಬ್ಬರನ್ನೊಬ್ಬರು ನೋಡಿ ನಗುತ್ತ ಹೇಳುತ್ತಿದ್ದೇವೆ:

"ನಾನು ನಾನೇ—ಬರೀ ನಾನು" 'ನಾನು' ಕುರಿತಾದ ಆ ವಿಶಿಷ್ಟ ಪಾಠವನ್ನು ನಾವು ಶಾಲೆಯಲ್ಲಿ, ಮುಂದೆ ವಿವರಿಸಿದ ರೀತಿಯಲ್ಲಿ ಕಲಿತೆವು.

ಶಾಲೆಯ ನಮ್ಮ ಕೊನೆಯ ವ್ಯಾಸಂಗಾವಧಿಯಲ್ಲಿ, ನಾವು ಸುಮಾರು ಹದಿನಾರು ವಯಸ್ಸಿನವರಾಗಿದ್ದಾಗ, ಯಾವಳೊಬ್ಬ ಪ್ರಖ್ಯಾತ ಸಿನೆಮಾ ನಟಿ ಅಥವಾ ಸಾಮಾಜಿಕ ವಲಯಗಳ 'ತಾರೆ'ಯ ರೀತಿ, ಮಾತಾಡುವ ವಿಧಾನ, ಕೇಶಾಲಂಕಾರದ ತರ ಮೊದಲಾದುವನ್ನು ನಮ್ಮಿಂದ ಸಾಧ್ಯವಿದ್ದಷ್ಟು ಅನುಕರಿಸುವುದು ನಮ್ಮ ದರ್ಜೆಯಲ್ಲಿದ್ದವರಿಗೆ ರೂಢಿಯಾಯಿತು. ಆ ಸ್ತ್ರೀಯು ಯಾರೆಂಬುದು ನಮಗೆ ಮುಖ್ಯವಾಗಿರಲಿಲ್ಲ. ವಾಸ್ತವಿಕತೆಯಲ್ಲಿ ಅಥವಾ ಕಲ್ಪನೆಯಲ್ಲಿ ಅವಳು ಪ್ರಖ್ಯಾತಳಾಗಿರುವುದೇ ನಮಗೆ ಮುಖ್ಯವಾಗಿದ್ದಿತು.

ಸ್ವಲ್ಪ ಸಮಯದೊಳಗೇ ನಮ್ಮ ದರ್ಜೆಯು, ನೈಜಸ್ಥಿತಿಯಲ್ಲಿರಲಾರದ ಹುಡುಗಿಯರಿಂದ ತುಂಬಿಕೊಂಡಿತು. ನಾವು ನಾವೇ ಆಗಿರುವುದು ಹೇಗೆ ಎಂಬುದನ್ನು ಮರೆತಿದ್ದೆವು.

ಆ ದಿನಗಳಲ್ಲಿ ನಮ್ಮನ್ನು ಕಂಡವರಿಗೆ ನಾವು ವಿಚಿತ್ರವಾಗಿ ತೋರಿರಬಹುದು. ಬಿಡಗಿಗೆ ಶರಣು ಹೋಗುವ, ಅನುಕರಣೆಯ ದುರ್ಬಲ ಜೀವಿಗಳಾಗಿ ತೋರಿರಬೇಕು.

ಅದೊಂದು ಬೆಳಗ್ಗೆ ಒಬ್ಬಳು ಹೊಸ ಹುಡುಗಿಯು ನಮ್ಮ ದರ್ಜೆಯನ್ನು ಸೇರಿದಳು. ಅವಳು ಬಾರದಿದ್ದರೆ ನಮ್ಮ ಆ ಕೃತಕಸ್ಥಿತಿಯು ಎಷ್ಟು ಕಾಲದ ವರೆಗೆ ಮುಂದುವರಿಯುತಿತ್ತು ಮತ್ತು ಅದರಿಂದ ನಮ್ಮ ಎಳೆಯ ಹಾಗೂ ವೃದ್ಧಿಹೊಂದುವ ವ್ಯಕ್ತಿತ್ವಕ್ಕೆ ಎಷ್ಟು ಹಾನಿಯಾಗುತಿತ್ತು ಎಂದು ಹೇಳುವುದು ಕಠಿನ.

ಮುಖ್ಯೋಪಾಧ್ಯಾಯಿನಿಯು ಹೇಳಿದಳು: "ಇವಳು ಕಮಲೆ. ಕರಾಚಿಯವಳು. ಈಗ ಅವಳ ಮನೆಯು ಮುಂಬಯಿಯಲ್ಲಿರುವುದರಿಂದ ಈ ಶಾಲೆಯಲ್ಲಿ ನಮ್ಮೊಟ್ಟಿಗೆ ಅವಳ ವಿದ್ಯಾಭ್ಯಾಸವನ್ನು ಮುಗಿಸಲು ಬಂದಿದ್ದಾಳೆ. ಮಕ್ಕಳೇ, ನೀವು ಇಲ್ಲಿ ಅವಳನ್ನು ಸಂತುಷ್ಟಳನ್ನಾಗಿ ಮಾಡುವಿರೆಂದು ಹಾರೈಸುತ್ತೇನೆ."

ನಾವು ಆ ಹೊಸಬಳನ್ನು ಕೌತುಕದಿಂದ ನೋಡಿದೆವು. ಕಮಲೆಯು ಕುಹಕ ಸೂಚಿಸುವ, ಭಾವಪ್ರದರ್ಶಕ ಕಣ್ಣುಗಳಿರುವ, ಲಘು ಮೈಕಟ್ಟಿನ ಜೀವಿಯಾಗಿದ್ದಳು. ಅವಳು ನಮ್ಮನ್ನು ಮರುಳುಗೊಳಿಸಿದಳು. ದಿನ

ಏಡೀ ಅವಳ ಕುರಿತು ಪ್ರತಿಯೊಂದನ್ನೂ ಗಮನಿಸಿ ನೋಡಿದೆವು. ಅವಳು ತನ್ನ ಪುಸ್ತಕಗಳನ್ನು ತೆರೆಯುವ, ಪೆನ್ಸಿಲನ್ನು ಮೊನಚು ಮಾಡುವ ಅಥವಾ 'ಬೋರ್ಡಿ'ನ ಕಡೆಗೆ ನೋಡುವ ರೀತಿ—ವಿಧಾನಗಳನ್ನೂ ನೋಡಿದೆವು. ಉಪಾಧ್ಯಾಯಿನಿಯರೊಡನೆ ಅವಳು ಮಾತಾಡುವ ವಿಧಾನವನ್ನೂ ಆಲಿಸಿದೆವು. ಅವಳು ನಗುವ ಕ್ರಮವನ್ನೂ ಗಮನಿಸಿದೆವು. ಅಂತೂ, ಆ ದಿನ ಕಮಲೆಯು ನಮ್ಮನ್ನು ಮೋಹಪರವಶರನ್ನಾಗಿ ಮಾಡಿದಳು. ನಮ್ಮಿಂದ ಅಂದು ಹೆಚ್ಚಿನ ಕೆಲಸ ಮಾಡಲಾಗಲಿಲ್ಲ.

ಊಟದ ವಿರಾಮ ಕಾಲದಲ್ಲಿ ಸುಶೀಲೆ ಮತ್ತು ನಾನು ಶಾಲಾ ಬಯಲಲ್ಲಿ ಅಡ್ಡಾಡುತ್ತಿದ್ದಾಗ, ಆ ಹೊಸ ಹುಡುಗಿಯ ವಿಷಯ ಚರ್ಚಿಸುತಿದ್ದೆವು. ಸುಶೀಲೆ ವಿಸ್ಮಯದಿಂದ ಹೇಳಿದಳು: "ಕಮಲೆಯ ವಿಷಯ ಅದೇನು? ಅವಳು ನಿಶ್ಚಯವಾಗಿಯೂ ಸ್ಫುರದ್ರೂಪಿ ಅಲ್ಲ; ಕುಶಲಳಾಗಿಲ್ಲ. ಆದರೂ ಅವಳು ಒಬ್ಬನ ಲಕ್ಷ್ಯವನ್ನು ಸೆಳೆಯುತ್ತಾಳೆ. ಅವಳು ಯಾರೋ ಒಬ್ಬರನ್ನು ಅನುಕರಿಸುತ್ತಿರಬೇಕು. ಆದರೆ, ಯಾರನ್ನು?"

ಕಮಲೆಯು ಹತ್ತಿರ ಬರುತಿದ್ದಂತೆ, ಕಂಡು, ನಾನು ಹೇಳಿದೆ: "ಸ್ವಲ್ಪ ತಡೆ. ಅವಳು ಇಲ್ಲಿಯೇ ಇದ್ದಾಳೆ."

ಅವಳು ಒಬ್ಬಳೇ ಚುರುಕಾದ ಹೆಜ್ಜೆಗಳಲ್ಲಿ ನಡೆಯುತಿದ್ದಳು. ನಾವು ಅವಳ ಸಮೀಪವಾದಾಗ, ಮುಂದರಿಯದೆ ನಿಂತಳು.

ದನಿಯಲ್ಲಿ ಸಾಧ್ಯವಿದ್ದಷ್ಟು ವಿನಯವನ್ನು ತಂದು ಕೊಂಡು ನಾನು ಹೇಳಿದೆ: "ಕ್ಷಮಿಸು, ಆದರೆ, ನೀನು ಯಾವಳೋ ಒಬ್ಬಳು ಪ್ರಖ್ಯಾತ ನಟಿಯನ್ನು ಅನುಕರಿಸುತ್ತಿರುವಿಯಾದರೆ, ಅದನ್ನು ತಿಳಿಯಲು ಈ ನನ್ನ ಗೆಳತಿ ಮತ್ತು ನಾನು ಆತುರಪಡುತ್ತೇವೆ. ನೀನು ಯಾರನ್ನೋ ಅನುಕರಿಸುತ್ತಿರಬೇಕು. ಏಕೆಂದರೆ, ಇಲ್ಲಿ ಪ್ರತಿಯೊಬ್ಬರೂ ನಿನ್ನನ್ನು ಬಹಳ ಮೆಚ್ಚುವಂತೆ ತೋರುತ್ತದೆ."

ಕಮಲೆಯ ಕಣ್ಣುಗಳು ಮೊದಲು ಬರಿಯ ಬೆರಗಿನಿಂದ ಅಗಲವಾದುವು. ಬಳಿಕ ಅವಳು ಫಕ್ಕನೆ ನಕ್ಕಳು. ತಡೆದ ನಗೆಯ ಮಧ್ಯೆ ಅವಳು ಉಸಿರೆಳೆಯುತ್ತ ಹೇಳಿದಳು: "ಇಲ್ಲಿ ನೋಡಿ, ನಾನು ನಗುತ್ತಿರುವುದಕ್ಕಾಗಿ ನೀವು ನನ್ನನ್ನು ಕ್ಷಮಿಸಬೇಕು. ನೀವು ಹೇಳುವುದಾದರೂ ಏನು? ನಾನು ಬೇರೆ ಯಾರೊಬ್ಬಳನ್ನು ಏಕೆ ಅನುಕರಿಸಬೇಕು? ನಾನು ನಾನೇ—

ಬರೇ ನಾನೇ ಆಗಿದ್ದೇನೆ; ಮತ್ತು ಯಾವ ತರದಲ್ಲಿಯೂ ಬೇರೆ ಯಾರು ಆಗಿರಲೂ ಇಚ್ಛಿಸುವುದಿಲ್ಲ. ಏಕೆಂದರೆ, ಕೇವಲ ನಾನೇ ಆಗಿರುವುದರಲ್ಲಿ ಬಹಳ ಆಹ್ಲಾದವಿದೆ ”

ಕಮಲೆಯ ವರ್ತನೆಗಾಗಿ ಸುಶೀಲೆ ಮತ್ತು ನಾನು ಒಮ್ಮೆ ಬಹಳ ಜುಗುಪ್ಸೆ ಪಟ್ಟೆವು. ಆದರೆ, ಅಂದು ಸಾಯಂಕಾಲ ನಾವು ಶಾಲೆಯಿಂದ ಮನೆಗೆ ಹೋಗುತ್ತಿದ್ದಾಗ ನಾನು ಹೇಳಿದೆ: “ಸುಶೀಲಾ, ನೋಡ! ಕಮಲೆಯು ನಮ್ಮ ಹಾಸ್ಯ ಮಾಡಿದುದಕ್ಕೆ ನಿಜವಾಗಿಯೂ ನಾವು ಅವಳನ್ನು ದೂಷಿಸಲಾಗದು ಎಂದು ನಾನು ನಿರ್ಧರಿಸಿದ್ದೇನೆ. ಅವಳು ಹೇಳಿದುದು ಸರಿ. ಇತರರನ್ನು ಅನುಕರಿಸುವಲ್ಲಿ ನಾವು ಅತಿರೇಕ ತಿಳಿಗೇಡಿಗಳಾಗಿ ತೋರುತ್ತಿರಬೇಕು. ಕಮಲೆಯು ಕೇವಲ ಸ್ವೈಜಸ್ಥಿತಿಯಲ್ಲಿರುವುದೇ ಅವಳು ಅಷ್ಟೊಂದು ಮನೋಹರಳಾಗಿ ಕಾಣುವ ಕಾರಣವೆಂದು ನಾನು ಭಾವಿಸುತ್ತೇನೆ. ಇನ್ನು ಮುಂದೆ ನಾನು ಯಾರನ್ನೂ ಅನುಕರಿಸುವುದಿಲ್ಲ. ಆದರೆ, ನನ್ನ ಸ್ವಂತ ವ್ಯಕ್ತಿತ್ವವನ್ನು ವೃದ್ಧಿಗೊಳಿಸಲು ಪ್ರಯತ್ನಿಸುತ್ತೇನೆ ” ಸುಶೀಲೆಯು ಹೇಳಿದಳು: “ನಿಶ್ಚಯವಾಗಿಯೂ ನಾವು ಎಂಥ ಹೆಡ್ಡರು!”

ಅಲ್ಲಿಂದ ಮುಂದೆ ನನ್ನ ಸ್ವಂತ ವ್ಯಕ್ತಿತ್ವವನ್ನು ಉಳಿಸಿಕೊಳ್ಳಲು ನಾನು ನನ್ನಿಂದ ಸಾಧ್ಯವಿದ್ದಷ್ಟು ಯತ್ನಿಸಿದ್ದೇನೆ. ನಮ್ಮಲ್ಲಿ ಪ್ರತಿಯೊಬ್ಬಳಿಗೂ ನಮ್ಮದೇ ಆದ ಒಂದು ವ್ಯಕ್ತಿತ್ವವಿದೆ. ಒಮ್ಮೆ ನಾವು ಆ ಪ್ರಶಸ್ತ ಮಿರುಗನ್ನು ಕಂಡುಹಿಡಿದೆವೆಂದರೆ ಅದನ್ನು ಮನಸ್ಸಿನಲ್ಲಿಟ್ಟುಕೊಂಡಿರುವುದು ನಮ್ಮ ಪಾಲಿಗೆ ಸೇರಿದುದು. ಏಕೆಂದರೆ, ಅದು ಜಗತ್ತಿನಲ್ಲಿ ಬೇರೆ ಯಾರಿಗೂ ಇರುವುದಿಲ್ಲ.

ನಮ್ಮ ಉಡುಪು, ಕೇಶಾಲಂಕಾರ, ಮೊದಲಾದುವುಗಳಲ್ಲೂ, ಬಳಕೆಯಲ್ಲಿರುವ ಪದ್ಧತಿಯ ಅಲ್ಪ ದಾಸಿಯಾಗಿರದೆ ಇರೋಣ. ಯಾವುದು ಬೇರೊಬ್ಬ ಹೆಂಗುಸನ್ನು ಮನೋಹರಳನ್ನಾಗಿ ಮಾಡುವುದೋ, ಅದು ನಮಗೆ ಸರಿಹೊಂದದಿರಬಹುದು. ನಮಗೆ ಸರಿ ಹೊಂದುವುದನ್ನೂ ಒಪ್ಪುವುದನ್ನೂ ನಾವು ತಕ್ಕಷ್ಟು ಯತ್ನ ಮಾಡಿದರೆ, ಸಾಮಾನ್ಯವಾಗಿ ಕಂಡುಹಿಡಿಯಬಹುದು. ಎಲ್ಲದಕ್ಕೂ ಮೇಲಾಗಿ, ನಾವು ನಾವೇ ಆಗಿರೋಣ.— ಅಂದರೆ ನಾವು ತಪ್ಪು ದಾರಿ ಹಿಡಿಯಲಾರೆವು.

[“ಬುಲ್‌ಬುಲ್” ಇವರ ಇಂಗ್ಲಿಷ್ ಲೇಖನದ ಭಾಷಾಂತರ ]



## ಕ್ಷಯರೋಗವು ಯಾರನ್ನು ಅತಿ ಬಿರುಸಾಗಿ ಹೊಡೆವುದು?

**ಇವನನ್ನು:**
ಅಪೌಷ್ಟಿಕ ಆಹಾರದಿಂದ ಬಡಕಲಾದನನನ್ನು.
ಅತಿಶ್ರಮದಿಂದ ದಣಿದವನನ್ನು.
ಸಾಮಾನ್ಯ ಆರೋಗ್ಯವಿಲ್ಲದವನನ್ನು.
ಪ್ರತಿರೋಧ ಶಕ್ತಿಯಿಲ್ಲದವನನ್ನು
ಅತಿ ಜನನಿಬಿಡ ಪ್ರದೇಶದಲ್ಲಿ
ಕಿಕ್ಕಿರಿದ ಮನೆಯಲ್ಲಿ ವಾಸಿಸಿರುವವನನ್ನು.

ಜನರಿಗೆ ಕ್ಷಯರೋಗದ ಕುರಿತು ತಿಳುವಳಿಕೆ ಕೊಡಲು ಮತ್ತು ಕ್ಷಯರೋಗ ನಿರೋಧ ಉಪಾಯಗಳನ್ನು ಕೈಗೊಳ್ಳುವ ಸಲುವಾಗಿ ನಿಧಿಯೆತ್ತಲು, ಕ್ಷಯ ರೋಗ ಮುದ್ರೆಗಳ ಮಾರಾಟ ಚಳವಳವು ಉದ್ದೇಶಿಸಲ್ಪಟ್ಟಿದೆ. ಕ್ಷಯ ರೋಗ ಮುದ್ರೆಗಳನ್ನು ಅಧಿಕಾಧಿಕ ಸಂಖ್ಯೆಯಲ್ಲಿ ಕೊಂಡುಕೊಳ್ಳಿರಿ ಮತ್ತು ನಿಮ್ಮ ಪ್ರಾಂತದ ಕ್ಷಯರೋಗ ಸಂಘಗಳಿಗೆ ಸಹಾಯ ಮಾಡಿರಿ.

**1954-55**




**ಕ್ಷಯರೋಗ ಮುದ್ರೆಗಳು.**

**ಒಂದು ಮುದ್ರೆಯ ಕ್ರಯ ಬರೇ ಒಂದಾಣೆ.**

ಅವುಗಳು ಈ ಕೆಳಗಿನವರಲ್ಲಿ ದೊರೆವುವು:

**ಗೌರವ ಕಾರ್ಯದರ್ಶಿ,**
**ಮದರಾಸು ಸಂಸ್ಥಾನದ ಕ್ಷಯರೋಗ ಸಂಘ,**
ರಿಪನ್ ಬಿಲ್ಡಿಂಗ್ಸ್, ಮದರಾಸು-3, ಮತ್ತು ಸಂಸ್ಥಾನದ ಇತರ ಏಜನ್ಸಿಗಳಿಂದ.

**ಭಾರತದಲ್ಲಿ ಐದನೆಯ ಕ್ಷಯರೋಗ ಮುದ್ರೆಗಳ ಮಾರಾಟ ಚಳವಳ!**
(ಭಾರತ ಕ್ಷಯರೋಗ ಸಂಘದ ಹೊಣೆಗಾರಿಕೆಗೊಳಪಟ್ಟುದು)

ಜಾಹೀರಾತಿನ ಸ್ಥಳ ದಾನ ಮಾಡಿದವರು:

**ಕೆನರಾ ಬೇಂಕ್, ಲಿಮಿಟೆಡ್, ಮಂಗಳೂರು.**

Edited, Printed and Published by K. V. Shenoy
at The Prabhat Printers, Ltd., Mangalore-1.